## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | : | 190 |
| **ಮಾನ್ಯ ಸದಸ್ಯರ ಹೆಸರು** | : | ಡಾ: ತೇಜಸ್ವಿನಿ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು) |
| **ಉತ್ತರಿಸಬೇಕಾದ ದಿನಾಂಕ** | : | 13-09-2021 |
| **ಉತ್ತರಿಸುವ ಸಚಿವರು** | : | ಪ್ರವಾಸೋದ್ಯಮ ಹಾಗೂ ಪರಿಸರ ಮತ್ತು ಜೀವಿಪರಿಸ್ಥಿತಿ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಪುರಾತನ ಕೋಟೆ ಕೊತ್ತಲ ದೇವಾಲಯ ಸಮುಚ್ಚಯಗಳನ್ನು ಪ್ರವಾಸಿ ತಾಣಗಳಾಗಿ ಪರಿಗಣಿಸಲಾಗಿದೆಯೇ; | ಹೌದು. |
| ಆ) | ಅಲ್ಲಿ ಪ್ರವಾಸಿಗರಿಗೆ ಮೂಲಭೂತ ಸೌಕರ್ಯ ಕಲ್ಪಿಸಲಾಗಿದೆಯೇ; ಸುರಕ್ಷೆಯೂ ಇದರಲ್ಲಿ ಸೇರಿದೆಯೇ; | ಸದರಿ ಪ್ರವಾಸಿ ತಾಣಗಳಲ್ಲಿ ಪ್ರವಾಸಿಗರಿಗೆ ಇಲಾಖೆಯ ಆಯವ್ಯಯದಲ್ಲಿ ಒದಗಿಸುವ ಅನುದಾನದ ಲಭ್ಯತೆಗನುಗುಣವಾಗಿ, ಹಂತಹಂತವಾಗಿ ಪ್ರವಾಸಿ ಮೂಲಭೂತ ಸೌಲಭ್ಯಗಳನ್ನು ಅಭಿವೃದ್ಧಿ ಪಡಿಸಲಾಗುತ್ತಿದೆ.<br><br>ಸದರಿ ಪ್ರವಾಸಿ ತಾಣಗಳಲ್ಲಿ ಇರುವ ರಾಜ್ಯ ಪುರಾತತ್ವ ಸ್ಮಾರಕಗಳ ಮತ್ತು ದೇವಾಲಯಗಳ ಸಂರಕ್ಷಣೆ ಕಾಮಗಾರಿಗಳನ್ನು ಪುರಾತತ್ವ, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಮೂಲಕ ಕೈಗೊಳ್ಳಲಾಗುತ್ತಿದೆ.<br><br>ರಾಜ್ಯದ ಜಿಲ್ಲೆಗಳ ಪ್ರಮುಖ ಪ್ರವಾಸಿ ತಾಣಗಳಲ್ಲಿ ಪುರಾತನ ಸ್ಮಾರಕಗಳು ಮತ್ತು ಪ್ರವಾಸಿಗರ ಸುರಕ್ಷತೆಗಾಗಿ 500 ಪ್ರವಾಸಿ ಮಿತ್ರರನ್ನು ನಿಯೋಜಿಸಲಾಗಿದೆ. |
| ಇ) | ನಂದಿ ಗಿರಿಧಾಮಕ್ಕೆ 'ಆಕಾಶ ಬುಟ್ಟಿ' ಅಳವಡಿಸುವ ಯೋಚನೆ ಇದೆಯೇ; ಅಧ್ಯಯನ ಆಗಿದೆಯೇ; ಸಾಧಕ ಬಾಧಕಗಳ ವಿವರ ನೀಡುವುದು; | ನಂದಿ ಗಿರಿಧಾಮಕ್ಕೆ ರೋಪ್‌ವೇಯನ್ನು ಸಾರ್ವಜನಿಕ ಖಾಸಗಿ ಸಹಭಾಗಿತ್ವ (ಪಿಪಿಪಿ) ಮಾದರಿಯಲ್ಲಿ ಅಳವಡಿಸುವ ಯೋಜನೆಯ ವಹಿವಾಟು ಸಲಹೆಗಾರ ಹಾಗೂ ಯೋಜನಾ ನಿರ್ವಹಣೆಗಾಗಿ ಮೆ|| ಐಡೆಕ್ ಸಂಸ್ಥೆಗೆ ಆರ್ಥಿಕ ಇಲಾಖೆಯ ಅಧಿಸೂಚನೆ ಸಂಖ್ಯೆ: ಆಇ/ 141/ ವೆಚ್ಚ-12/ 2021, ದಿನಾಂಕ: 30.04.2021 ರಲ್ಲಿ ಕೆ.ಟಿ.ಟಿ.ಪಿ. ನಿಯಮಗಳಡಿ 4ಜಿ ವಿನಾಯಿತಿ ನೀಡಲಾಗಿದೆ.<br><br>ಅದರಂತೆ, ಈಗಾಗಲೇ ಮೆ: ಐಡೆಕ್ ಸಂಸ್ಥೆಯೊಂದಿಗೆ ದಿನಾಂಕ:13.08.2021 ರಂದು ಕರಾರು ಮಾಡಿ ಕೊಳ್ಳಲಾಗಿರುತ್ತದೆ. ಈ ಯೋಜನೆಯ ಅನುಷ್ಠಾನದ ಕುರಿತಂತೆ ಮೆ: ಐಡೆಕ್ ಸಂಸ್ಥೆಯು ಕರಡು ಆರ್.ಎಫ್.ಪಿ. ಯನ್ನು ತಯಾರಿಸಿರುತ್ತಾರೆ. ಸದರಿ ದಾಖಲೆಗಳನ್ನು ಪರಿಶೀಲಿಸಿ ಟೆಂಡರ್ ಕರೆಯುವ ಹಂತದಲ್ಲಿರುತ್ತದೆ. |

| | | |
|---|---|---|
| ಈ) | ದುರ್ಗಮ ಅರಣ್ಯಗಳಲ್ಲಿ ಕಣಿವೆಗಳಲ್ಲಿ ಪ್ರಕೃತಿ ಸೌಂದರ್ಯ ಸವಿಯಲು 'ಆಕಾಶ ಬುಟ್ಟಿ' (Rope way) ಯೋಚನೆ ಇದೆಯೇ; | ಕೊಡಚಾದ್ರಿ ಬೆಟ್ಟದಲ್ಲಿ ರೋಪ್‌ವೇಯನ್ನು ಸಾರ್ವಜನಿಕ ಖಾಸಗಿ ಸಹಭಾಗಿತ್ವ (ಪಿಪಿಪಿ) ಮಾದರಿಯಲ್ಲಿ ಅಳವಡಿಸುವ ಯೋಜನೆಯ ವಹಿವಾಟು ಸಲಹೆಗಾರ ಹಾಗೂ ಯೋಜನಾ ನಿರ್ವಹಣೆಗಾಗಿ ಮೆ॥ ಐಡೆಕ್ ಸಂಸ್ಥೆಗೆ ಆರ್ಥಿಕ ಇಲಾಖೆಯ ಅಧಿಸೂಚನೆ ಸಂಖ್ಯೆ: ಆಇ/141/ವೆಚ್ಚ-12/2021, ದಿನಾಂಕ: 30.04.2021 ರಲ್ಲಿ ಕೆ.ಟಿ.ಟಿ.ಪಿ. ನಿಯಮಗಳಡಿ 4ಜಿ ವಿನಾಯಿತಿ ನೀಡಲಾಗಿದೆ. ಯೋಜನೆಯ ಅಧ್ಯಯನ ವರದಿ ಪಡೆದು ಪರಿಶೀಲಿಸಿ ಮುಂದಿನ ಕ್ರಮ ವಹಿಸಲಾಗುವುದು. |
| ಉ) | ಶಿಥಿಲಾವಸ್ಥೆಯಲ್ಲಿರುವ ಪುರಾತನ ಸ್ಮಾರಕ ರಕ್ಷಣೆ ಜೀರ್ಣೋದ್ಧಾರಕ್ಕಾಗಿ ಯಾವ ಕ್ರಮ ವಹಿಸಲಾಗಿದೆ; ಎಲ್ಲಿ, ಎಷ್ಟು ಕಡೆ? (ವಿವರ ನೀಡುವುದು) | ಪ್ರವಾಸೋದ್ಯಮ ಇಲಾಖೆಯಿಂದ ಕೈಗೆತ್ತಿಕೊಂಡಿರುವ ಪುರಾತನ ಸ್ಮಾರಕ ಮತ್ತು ಸಂರಕ್ಷಣೆ ಕಾಮಗಾರಿಗಳ ವಿವರಗಳನ್ನು **ಅನುಬಂಧದಲ್ಲಿ** ಒದಗಿಸಿದೆ. |

TOR 174 TDV 2021

(ಆನಂದ್ ಸಿಂಗ್)
ಪ್ರವಾಸೋದ್ಯಮ ಹಾಗೂ
ಪರಿಸರ ಮತ್ತು ಜೀವಿಪರಿಸ್ಥಿತಿ ಸಚಿವರು

# ಕರ್ನಾಟಕ ವಿಧಾನ ಪರಿಷತ್ತಿನ ಪ್ರಶ್ನೆ ಸಂಖ್ಯೆ 190ಕ್ಕೆ ಅನುಬಂಧ

## ಬೆಂಗಳೂರು ವಿಭಾಗದಲ್ಲಿ ಮಂಜೂರಾಗಿರುವ ಪುರಾತನ ಸ್ಮಾರಕ ರಕ್ಷಣೆ ಮತ್ತು ಜೀರ್ಣೋದ್ಧಾರ ಹಾಗೂ ಪ್ರವಾಸಿ ಸೌಲಭ್ಯಗಳನ್ನು ಕಲ್ಪಿಸಲು ಕೈಗೆತ್ತಿಕೊಂಡಿರುವ ಕಾಮಗಾರಿಗಳ ವಿವರ

(ರೂ.ಲಕ್ಷಗಳಲ್ಲಿ)

| ಕ್ರ. ಸಂ | ಕಾಮಗಾರಿಯ ಹೆಸರು | ಅಂದಾಜು ಮೊತ್ತ |
|---|---|---|
| 1 | 2 | 3 |
| | ಬೆಂಗಳೂರು ನಗರ ಜಿಲ್ಲೆ | |
| | ಆನೇಕಲ್ ತಾಲ್ಲೂಕು | |
| 1 | ಬೆಂಗಳೂರು ಕೆಂಪೇಗೌಡರ 4 ಕಾವಲು ಗೋಪುರದ ಸಂರಕ್ಷಣಾ ಕಾಮಗಾರಿ. | 23.30 |
| 2 | ಬೆಂಗಳೂರು ಬಸವನಗುಡಿಯಲ್ಲಿರುವ ಶ್ರೀ ದೊಡ್ಡಬಸವಣ್ಣ ದೇವಾಲಯದ ಸಂರಕ್ಷಣಾ ಕಾಮಗಾರಿ. | 46.50 |
| | ಬೆಂಗಳೂರು ನಗರ ಜಿಲ್ಲೆ ಒಟ್ಟು ಮೊತ್ತ | 69.80 |
| | ತುಮಕೂರು ಜಿಲ್ಲೆ | |
| | ಶಿರಾ ತಾಲ್ಲೂಕು | |
| 3 | ಶಿರಾದಲ್ಲಿರುವ ಕಸ್ತೂರಿ ರಂಗಪ್ಪ ನಾಯಕ ಕೋಟೆಯ ಸುತ್ತ ಚೈನ್ ಲಿಂಕ್ ಫೆನ್ಸಿಂಗ್, ಮೋಟ್ ಅಭಿವೃದ್ಧಿ ನೂತನ ಸೇತುವೆ ನಿರ್ಮಾಣ, ಹೊರಭಾಗದಲ್ಲಿ ಗೇಟ್ ನಿರ್ಮಿಸುವುದು, ಕೋಟೆಯ ಪ್ರವೇಶ ದ್ವಾರದಲ್ಲಿ ನೂತನ ಬಾಗಿಲು ನಿರ್ಮಿಸುವ ಕಾಮಗಾರಿಗಳು. | 500.00 |
| | ತುಮಕೂರು ಜಿಲ್ಲೆ ಒಟ್ಟು ಮೊತ್ತ | 500.00 |
| | ರಾಮನಗರ ಜಿಲ್ಲೆ | |
| | ಮಾಗಡಿ ತಾಲ್ಲೂಕು | |
| 4 | ಮಾಗಡಿ ಕೋಟೆ ಪ್ರದೇಶದಲ್ಲಿ ಪ್ರವಾಸಿ ಸೌಲಭ್ಯಗಳ ಅಭಿವೃದ್ಧಿ (ಕೇಂದ್ರ ಯೋಜನೆ) | 486.79 |
| 5 | ರಾಮನಗರ ಜಿಲ್ಲೆಯ ಮಾಗಡಿ ಕೋಟೆ ಪ್ರದೇಶದಲ್ಲಿ ಪ್ರವಾಸಿ ಸೌಲಭ್ಯಗಳ ಅಭಿವೃದ್ಧಿ ಕಾಮಗಾರಿ. | 198.06 |
| 6 | ರಾಮನಗರ ಜಿಲ್ಲೆ ಮಾಗಡಿ ತಾಲ್ಲೂಕು, ಮಾಗಡಿಯಲ್ಲಿರುವ ಶ್ರೀ ಸೋಮೇಶ್ವರ ದೇವಾಲಯದ ಸಂರಕ್ಷಣಾ ಕಾಮಗಾರಿ. | 51.00 |
| | ರಾಮನಗರ ಜಿಲ್ಲೆ ಒಟ್ಟು ಮೊತ್ತ | 735.85 |
| | ಬೆಂಗಳೂರು ವಿಭಾಗದ ಒಟ್ಟು ಮೊತ್ತ | 1305.65 |